# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 193(230)

ಸದಸ್ಯರ ಹೆಸರು : ಡಾ॥ ಚಂದ್ರಶೇಖರ್ ಬಿ ಪಾಟೀಲ್ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 17.02.2022

ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಲ್ಯಾಣ ಕರ್ನಾಟಕ ಭಾಗದಲ್ಲಿ ಹೆಚ್ಚು ಮರಳು ದಂಧೆ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಕಲ್ಯಾಣ ಕರ್ನಾಟಕ ಭಾಗದಲ್ಲಿ ಮರಳು ದಂಧೆ ನಡೆಯುತ್ತಿರುವುದು ಗಮನಕ್ಕೆ ಬಂದ ಕೂಡಲೇ ಪ್ರಕರಣಗಳು ದಾಖಲು ಮಾಡಿ, ಕ್ರಮ ಜರುಗಿಸಲಾಗುತ್ತಿದೆ. |
| (ಆ) | ಬಂದಿದ್ದಲ್ಲಿ, ಮರಳು ಸಾಗಾಣಿಕೆ ದಂಧೆಕೋರರ ವಿರುದ್ಧ ಎಷ್ಟು ಪ್ರಕರಣಗಳು ದಾಖಲಾಗಿವೆ? (ವಿವರ ನೀಡುವುದು) | ಕಲ್ಯಾಣ ಕರ್ನಾಟಕ ಭಾಗದಲ್ಲಿ ಮರಳು ಸಾಗಾಣಿಕೆ ದಂಧೆಕೋರರ ವಿರುದ್ಧ ದಾಖಲಾದ ಪ್ರಕರಣಗಳ ವಿವರ ಕೆಳಗಿನಂತಿದೆ. (ಕೋಷ್ಟಕ ಕೆಳಗೆ) |

| ಕ್ರಸ | ಘಟಕ | ವರ್ಷ | | | |
|---|---|---|---|---|---|
| | | 2019 | 2020 | 2021 | 2022 |
| 1 | ಕಲಬುರಗಿ ನಗರ | 20 | 9 | 6 | 0 |
| 2 | ಕಲಬುರಗಿ ಜಿಲ್ಲೆ | 252 | 182 | 215 | 21 |
| 3 | ರಾಯಚೂರು | 234 | 140 | 172 | 30 |
| 4 | ಯಾದಗಿರಿ | 157 | 116 | 85 | 9 |
| 5 | ಬೀದರ್ | 1 | 1 | 0 | 0 |
| 6 | ಕೊಪ್ಪಳ | 225 | 115 | 45 | 0 |
| 7 | ಬಳ್ಳಾರಿ | 207 | 75 | 39 | 7 |
| 8 | ವಿಜಯನಗರ | 181 | 130 | 122 | 32 |
| | ಒಟ್ಟು | **1277** | **768** | **684** | **99** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಇ) | ಅಕ್ರಮ ಮರಳು ಸಾಗಣೆ ದಂಧೆ ತಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು? | ಅಕ್ರಮ ಮರಳು ಸಾಗಣೆ ದಂಧೆ ತಡೆಯಲು ಕೈಗೊಂಡ ಕ್ರಮ:<br>1. ಅಕ್ರಮ ಮರಳು ಸಾಗಾಣಿಕೆಯಾಗದಂತೆ ಚೆಕ್ ಪೋಸ್ಟ್‌ಗಳನ್ನು ನಿರ್ಮಿಸಿ ವಾಹನಗಳನ್ನು ತಪಾಸಣೆ ಮಾಡಿ ಯಾವುದೇ ರೀತಿಯಲ್ಲಿ ಆಕ್ರಮವಾಗಿ ಮರಳು ಗಣಿಕಾರಿಕೆ ಚಟುವಟಿಕೆಗಳು ನಡೆಯದಂತೆ ನಿಗಾ ವಹಿಸಲಾಗಿದೆ. ರಾತ್ರಿ ಗಸ್ತು ಮತ್ತು ಹಗಲು ಗಸ್ತು ಸಬ್ ಬೀಟ್ ಕರ್ತವ್ಯಕ್ಕೆ ಸಿಬ್ಬಂದಿಗಳನ್ನು ನಿಯೋಜನೆ ಮಾಡಲಾಗುತ್ತಿದೆ.<br>2. ಈ ಸಮಯದಲ್ಲಿ ಅಕ್ರಮ ಮರಳು ಸಾಗಾಣಿಕೆ ಕಂಡು ಬಂದಲ್ಲಿ ಅಂಥಹವರ ವಿರುದ್ಧ ಕಾನೂನು ಕ್ರಮ ಕೈಗೊಂಡು |

| | | |
|---|---|---|
| | | ಆರೋಪಿತರನ್ನು ನ್ಯಾಯಾಂಗ ಬಂಧನಕ್ಕೆ ಒಳಪಡಿಸಲಾಗುತ್ತಿದೆ.<br>3. ಮಹಾರಾಷ್ಟ್ರ ರಾಜ್ಯಕ್ಕೆ ಹೊಂದಿಕೊಂಡಿರುವ ಹಳ್ಳಿಗಳಲ್ಲಿ ಸಭೆಗಳನ್ನು ಮಾಡಿ ಸಾರ್ವಜನಿಕರಿಗೆ ಈ ಕುರಿತು ತಿಳುವಳಿಕೆ ನೀಡಿ ಅಹಿತಕರ ಘಟನೆಗಳು ನಡೆಯದಂತೆ ನಿಗಾವಹಿಸಲಾಗಿದೆ.<br>4. ಅರಣ್ಯ, ಕಂದಾಯ, ಲೋಕೋಪಯೋಗಿ, ಗಣಿ & ಭೂ ವಿಜ್ಞಾನ ಇಲಾಖೆಗಳೊಂದಿಗೆ ನಿರಂತರ ಸಂಪರ್ಕದಲ್ಲಿದ್ದು, ಇತರೆ ಇಲಾಖೆಗಳಿಗೆ ಅಗತ್ಯ ಸಹಕಾರವನ್ನು ಒದಗಿಸಿ ಯಾವುದೇ ರೀತಿಯ ಅಕ್ರಮ ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆ ನಡೆಯದಂತೆ ಕ್ರಮಕೈಗೊಳ್ಳಲಾಗುತ್ತಿದೆ. ಈ ವಿಷಯದಲ್ಲಿ ನಿರ್ಲಕ್ಷತನ ತೋರುವ ಅಧಿಕಾರಿ/ ಸಿಬ್ಬಂದಿಯವರ ವಿರುದ್ಧ ಕಟ್ಟುನಿಟ್ಟಿನ ಕ್ರಮಕೈಗೊಳ್ಳಾಲಾಗುತ್ತಿದೆ.<br>5. ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪತ್ರ ಪಡೆದು ಮರಳು ಸಾಗಿಸುವ ವಾಹನಗಳನ್ನು ನಿಯಮಿತವಾಗಿ ತಪಾಸಣೆ ಮಾಡಿ ನಕಲಿ ಪರ್ಮಿಟ್ಟುಗಳನ್ನು ಪಡೆದು ಮರಳನ್ನು ಸಾಗಿಸುವ ವಾಹನಗಳ ಮೇಲೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುತ್ತಿದೆ. |

**ಹೆಚ್‌ಡಿ 44 ಎಸ್‌ಎಸ್‌ಟಿ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು